# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1240
2. ಮಾನ್ಯ ಸದಸ್ಯರ ಹೆಸರು : ಶ್ರೀ ಕೆ.ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸಬೇಕಾದ ದಿನಾಂಕ : 21.12.2018
4. ಉತ್ತರಿಸುವ ಸಚಿವರು : ಮಾನ್ಯ ಸಹಕಾರ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಆನ್‌ಲೈನ್ ವ್ಯಾಪಾರ ವಹಿವಾಟಿನ ಭರಾಟೆಯಿಂದ ಯಶವಂತಪುರ ಎಪಿಎಂಸಿಯ ವ್ಯಾಪಾರಕ್ಕೆ ಕುತ್ತು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆಲವು ಸಂಸ್ಥೆಗಳು ಆನ್‌ಲೈನ್ ವ್ಯಾಪಾರ ವಹಿವಾಟು ನಡೆಸುತ್ತಿದ್ದು, ಪ್ರಾಂಗಣದಲ್ಲಿನ ವರ್ತಕರುಗಳಿಗೆ ತೊಂದರೆಯಾಗುತ್ತಿದೆ ಎಂದು ಪ್ರತಿಭಟನೆ ನಡೆಸಿ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಹಾಲಿ ಇರುವ ಕಾನೂನಿನಡಿಯಲ್ಲಿ ಸದರಿ ಸಂಸ್ಥೆಗಳ ವಹಿವಾಟು ನಡೆಯುತ್ತಿರುವ ಬಗ್ಗೆ ಪರಿಶೀಲನೆ ಕೈಗೊಂಡು ವರದಿ ಸಲ್ಲಿಸುವಂತೆ ಅಧಿಕಾರಿಗಳಿಗೆ ತಿಳಿಸಿದ್ದು, ವರದಿ ಬಂದ ನಂತರ ಕೂಲಂಕುಷವಾಗಿ ಪರಿಶೀಲಿಸಿ ಅಗತ್ಯ ಕ್ರಮ ಕೈಗೊಳ್ಳಲಾಗುವುದು. |
| ಆ. | ವಿದೇಶಿ ಕಂಪನಿಗಳು ಬಂದು ಆಹಾರ ಕ್ಷೇತ್ರದಲ್ಲಿ ಪಾಲ್ಗೊಳ್ಳುವುದನ್ನು ತಡೆಯಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ; | ಉದಾರೀಕರಣ ನೀತಿ ಹಾಗೂ ಜಾಗತೀಕರಣ ಹಿನ್ನಲೆಯಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರವು ರೂಪಿಸಿರುವ ನೀತಿ ನಿಯಮಗಳಿಗನುಗುಣವಾಗಿ ವ್ಯಾಪಾರ ವಹಿವಾಟು ನಡೆಸಲು ಅವಕಾಶಿಸಲಾಗಿದೆ.<br><br>ಕೇಂದ್ರ ಸರ್ಕಾರ/ರಾಜ್ಯ ಸರ್ಕಾರದ ವಿವಿಧ ಇಲಾಖೆಗಳು ತಮ್ಮ ವ್ಯಾಪ್ತಿಯಲ್ಲಿನ ಕಾನೂನಿಗೆ ಅನುಗುಣವಾಗಿ ವ್ಯಾಪಾರ ವಹಿವಾಟು ನಡೆಸುತ್ತಿರುವುದನ್ನು ಪರಿಶೀಲಿಸಲು ಹಾಗೂ ಲೋಪಗಳು ಕಂಡುಬಂದಲ್ಲಿ ಕ್ರಮ ಕೈಗೊಳ್ಳಲು ಅವಕಾಶವಿದೆ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರಡಿ ಅಧಿಸೂಚಿತ ಕೃಷಿ ಉತ್ಪನ್ನಗಳ ಸಗಟು/ಚಿಲ್ಲರೆ ವಹಿವಾಟು ನಡೆಸುವ ಸಂಬಂಧ ಇರುವ ನಿಬಂಧನೆಗಳಿಗನುಗುಣವಾಗಿ ಲೈಸೆನ್ಸ್ ಪಡೆದು ಕಾರ್ಯನಿರ್ವಹಿಸಲು ಅವಕಾಶಿಸಲಾಗಿದೆ. ವ್ಯಾಪಾರ ಕ್ಷೇತ್ರದಲ್ಲಿ ಇದರಿಂದಾಗಿ ಅನುಕೂಲವಿಲ್ಲವೆಂಬ ಅಂಶಗಳು ಕಂಡುಬಂದಲ್ಲಿ ಇತರೆ ವ್ಯಾಪಾರಸ್ಥರು Competition Commission of India ಇಲ್ಲಿ ದೂರು ಸಲ್ಲಿಸಬಹುದಾಗಿರುತ್ತದೆ. |

| | | |
|---|---|---|
| ಇ. | ವಿದೇಶಿ ಕಂಪನಿಗಳು ಆನ್‌ಲೈನ್ ವಹಿವಾಟಿನಲ್ಲಿ ಮಿತಿಯಿಲ್ಲದಂತೆ ಕೊಡುಗೆಗಳನ್ನು ಘೋಷಿಸಿ ವ್ಯಾಪಾರ ಕ್ಷೇತ್ರದಲ್ಲಿ ಅಲ್ಲೋಲ ಕಲ್ಲೋಲ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | -- ಬಂದಿರುವುದಿಲ್ಲ -- <br><br> ಕೇಂದ್ರ ಸರ್ಕಾರದ ಕಾಯ್ದೆ ಹಾಗೂ ರಾಜ್ಯ ಸರ್ಕಾರದ ವಿವಿಧ ಕಾಯ್ದೆಯಡಿಯಲ್ಲಿನ ನಿಬಂಧನೆಗಳಿಗನುಗುಣವಾಗಿ ಸದರಿ ಸಂಸ್ಥೆಗಳು ಲೈಸೆನ್ಸ್ ಪಡೆದು ವ್ಯಾಪಾರ ವಹಿವಾಟು ನಡೆಸಬೇಕಿರುತ್ತದೆ. ಯಶಸ್ಸಿನ ಸಾಧ್ಯತೆಗಳ ಮೇರೆಗೆ ವ್ಯಾಪಾರ ವಹಿವಾಟು ಅವಲಂಬಿಸಿರುತ್ತದೆ. ಇದರಿಂದಾಗಿ ಮಾರುಕಟ್ಟೆಯಲ್ಲಿ ಸ್ಪರ್ಧಾತ್ಮಕ ವಾತಾವರಣ ಉಂಟಾಗುತ್ತಿದ್ದು, ಗ್ರಾಹಕರಿಗೆ ಅನುಕೂಲವಾಗುತ್ತದೆ. |
| ಈ | ಈ ನಿಟ್ಟಿನಲ್ಲಿ ಇ-ಕಾಮರ್ಸ್ ಅನ್ನು ಹತೋಟಿಯಲ್ಲಿಡಲು ಕೇಂದ್ರ ಸರ್ಕಾರದೊಂದಿಗೆ ಚರ್ಚಿಸಿ ರಾಷ್ಟ್ರೀಯ ನೀತಿ ಜಾರಿಗೆ ತರಲು ಸರ್ಕಾರ ಪ್ರಯತ್ನಿಸುವುದೇ? | ರಾಜ್ಯ ಸರ್ಕಾರದ ವ್ಯಾಪ್ತಿಗೆ ಬರದೇ ಇದ್ದು, ಕೇಂದ್ರ ಸರ್ಕಾರದ ಗಮನಕ್ಕೆ ತರಲಾಗುವುದು. |

**ಸಂಖ್ಯೆ: ಸಇ 526 ಎಂಆರ್‌ಇ 2018**

**(ಬಂಡೆಪ್ಪ ಖಾಶೆಂಪೂರ)**
**ಸಹಕಾರ ಸಚಿವರು.**